# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 550
ಸದಸ್ಯರ ಹೆಸರು : ಶ್ರೀ ಪಿ.ಆರ್.ರಮೇಶ್
(ನಾಮನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ : 24.09.2020
ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿರವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ/ ಸರ್ಕಾರದಿಂದ ಬೆಂಗಳೂರು ನಗರದ ಜಯಪ್ರಕಾಶ್ ನಾರಾಯಣ್ 8ನೇ ಹಂತದ ಬಡಾವಣೆಯ ನಿರ್ಮಾಣ ಯಾವ ಹಂತದಲ್ಲಿದೆ; (ಈ ಕುರಿತು ಯಾವುದೇ ನ್ಯಾಯಾಲಯದ ಆದೇಶಗಳು ಇದ್ದಲ್ಲಿ ಅದರ ಬಗ್ಗೆ ಸಂಕ್ಷಿಪ್ತವಾಗಿ ಮಾಹಿತಿ ನೀಡುವುದು.) | ಜಯಪ್ರಕಾಶ್ ನಾರಾಯಣ್ 8ನೇ ಹಂತದ ಬಡಾವಣೆ ರಚಿಸಲು 945 ಎಕರೆ 29 ಗುಂಟೆ ಜಮೀನಿಗೆ ಅಂತಿಮ ಅಧಿಸೂಚನೆ ಸಂಖ್ಯೆ:HUD/292/MNX/93 ರಲ್ಲಿ ದಿನಾಂಕ:19.10.1994, UDD/434/MNX/97 ರಲ್ಲಿ ದಿನಾಂಕ:17.09.1997 ಮತ್ತು UDD/457/MNX/98 ರಲ್ಲಿ ದಿನಾಂಕ: 05.04.1999 ರಂದು ಹೊರಡಿಸಲಾಗಿರುತ್ತದೆ. ಅವುಗಳಲ್ಲಿ ತಾಂತ್ರಿಕ ವಿಭಾಗಕ್ಕೆ 380 ಎಕರೆ 17 ಗುಂಟೆ ಜಮೀನನ್ನು ಹಸ್ತಾಂತರಿಸಲಾಗಿರುತ್ತದೆ. ಸದರಿ ಹಸ್ತಾಂತರಿಸಿದ ಭೂಪ್ರದೇಶದಲ್ಲಿ 217 ಎಕರೆ 06 ಗುಂಟೆ ಜಮೀನನ್ನು ಬಡಾವಣೆ ನಿರ್ಮಿಸಲು ಉಪಯೋಗಿಸಿಕೊಳ್ಳಲಾಗಿರುತ್ತದೆ ಹಾಗೂ ಬಡಾವಣೆಯಲ್ಲಿ ವಿವಿಧ ಅಳತೆಯ 2229 ನಿವೇಶನಗಳನ್ನು ರಚಿಸಿ ಹಂಚಿಕೆ ಮಾಡಲಾಗಿರುತ್ತದೆ. |
| ಆ) | ಕೊತ್ತನೂರು ಗ್ರಾಮದ ಸರ್ವೆ ನಂ. 87 ಒಟ್ಟು 57 ಎಕರೆ 11 ಗುಂಟೆ ಜಮೀನನ್ನು ಸರ್ಕಾರದ ರಿಸರ್ವ್ ಕಾವಲ್ ಎಂದು ಇರುವುದರ ಬಗ್ಗೆ ಪ್ರಾಧಿಕಾರದಿಂದ ಯಾವ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ; (ಈ ಕುರಿತು ಸಂಕ್ಷಿಪ್ತ ಮಾಹಿತಿಯನ್ನು ನೀಡುವುದು) | ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ ಸರ್ವೆ ನಂ 87 ರ 57 ಎಕರೆ 11 ಗುಂಟೆ ಸರ್ಕಾರದ ರಿಸರ್ವ್ ಕಾವಲ್ ಜಮೀನನ್ನು ಜೆ.ಪಿ.ನಗರ 8ನೇ ಹಂತದ ಬಡಾವಣೆಗಾಗಿ ಭೂಸ್ವಾಧೀನ ಪಡೆಯಲು ಪ್ರಾಧಿಕಾರದಿಂದ ದಿನಾಂಕ: 02.03.1988 ರಂದು ಪ್ರಾಥಮಿಕ ಅಧಿಸೂಚನೆ ಹೊರಡಿಸಲಾಗಿರುತ್ತದೆ. ಸದರಿ ಜಮೀನಿಗೆ ದಿನಾಂಕ:19.10.1994 ರಂದು ಅಂತಿಮ ಅಧಿಸೂಚನೆ ಹೊರಡಿಸಲಾಗಿರುತ್ತದೆ, ನಂತರ ರಾಜ್ಯ ಉಚ್ಚ ನ್ಯಾಯಾಲಯದ WP No 10358-362/88, WP No 8783/1995, 34796/96, 566-567/98, 3324-25/98, 7681/98 ರಲ್ಲಿನ ಆದೇಶದಂತೆ ಒಟ್ಟು 57 ಎಕರೆ 11 ಗುಂಟೆ ಜಮೀನಿನ ಪೈಕಿ 23 ಎಕರೆ ಜಮೀನಿಗೆ ಐತೀರ್ಪು ಅನುಮೋದಿಸಿ, ಭೂಪರಿಹಾರವನ್ನು ಭೂಸ್ವಾಧೀನ ಕಾಯ್ದೆ 30, 31(2) ರಂತೆ ಸಿವಿಲ್ ನ್ಯಾಯಾಲಯಕ್ಕೆ ಜಮಾ ಮಾಡಲಾಗಿರುತ್ತದೆ. ನಂತರ ಅಭಿಯಂತರರ ಶಾಖೆಯ ಅಭಿಪ್ರಾಯದಂತೆ ಪುನಃ 18 ಎಕರೆ 30 ಗುಂಟೆ ಜಮೀನಿಗೆ ದಿನಾಂಕ:10.09.2009 ರಂದು ಮತ್ತು 05 ಎಕರೆ ಜಮೀನಿಗೆ ದಿನಾಂಕ:12.10.2009 ರಂದು ಪ್ರತ್ಯೇಕ ಐತೀರ್ಪು ರಚಿಸಲಾಗಿರುತ್ತದೆ. ತದನಂತರ ದಿನಾಂಕ: 12.11.2009 ರಂದು 05 ಎಕರೆ ಜಮೀನಿಗೆ ಪ್ರಾಥಮಿಕ ಅಧಿಸೂಚನೆ ಹೊರಡಿಸಲಾಗಿರುತ್ತದೆ. ಒಟ್ಟಾರೆ 47 ಎಕರೆ 11 ಗುಂಟೆ ಜಮೀನಿನ ಪೈಕಿ 12 ಎಕರೆ 31 ಗುಂಟೆ ಜಮೀನನ್ನು ಹೊರತುಪಡಿಸಿ ಉಳಿದ ಜಮೀನನ್ನು ಪ್ರಾಧಿಕಾರದಿಂದ ಭೂಸ್ವಾಧೀನ ಪಡಿಸಿಕೊಳ್ಳಲಾಗಿರುತ್ತದೆ. |

| | | |
|---|---|---|
| ಇ) | OS No 8957/1996 ಸಿವಿಲ್ ನ್ಯಾಯಾಲಯದಲ್ಲಿ ಸರ್ವೆ ನಂ 87 ಕ್ಕೆ ಸಂಬಂಧಿಸಿದ ಆದೇಶ ಪ್ರಕಾರ ಪ್ರಾಧಿಕಾರ ಯಾವ ಕ್ರಮಗಳನ್ನು ಜರುಗಿಸಿದೆ; (ಈ ಸಂಬಂಧ ಕೈಗೊಂಡ ಕ್ರಮಗಳ ಕುರಿತು ಸಂಕ್ಷಿಪ್ತ ಮಾಹಿತಿಯನ್ನು ನೀಡುವುದು) | ಬೆಂಗಳೂರು ನಗರದ ಜಯಪ್ರಕಾಶ್ ನಾರಾಯಣ್ 8ನೇ ಹಂತದ ಬಡಾವಣೆ, ಕೊತ್ತನೂರು ಗ್ರಾಮದ ಸರ್ವೆ ನಂಬರ್ 87 ಕ್ಕೆ ಸಂಬಂಧಿಸಿದಂತೆ ಶ್ರೀ ಗೋವಿಂದ ರಾವ್ ಮತ್ತು ಇತರರು ಪ್ರಾಧಿಕಾರ ಮತ್ತು ಇತರರ ವಿರುದ್ಧ ಮಾನ್ಯ ಸಿಟಿ ಸಿವಿಲ್ ನ್ಯಾಯಾಲಯದಲ್ಲಿ ದಾಖಲಿಸಿದ್ದ OS No 8957/1996 ದಾವೆಯು ದಿನಾಂಕ : 25.11.2006 ರಂದು ವಜಾಗೊಂಡಿರುತ್ತದೆ. ಈ ಹಿನ್ನಲೆಯಲ್ಲಿ ಸದರಿ ಜಮೀನಿನ ಭೂಸ್ವಾಧೀನದ ಪ್ರಕ್ರಿಯೆಯನ್ನು ಮುಂದುವರಿಸಲಾಗಿದೆ. |
| ಈ) | ಬೆಂಗಳೂರು ದಕ್ಷಿಣ ತಾಲ್ಲೂಕು ಹಿಂದುಳಿದ ವರ್ಗ, ಹಿಂದುಳಿದ ಜಾತಿ ಮತ್ತು ಹಿಂದುಳಿದ ಪಂಗಡಗಳ ಕ್ಷೇಮಾಭಿವೃದ್ಧಿ ಸಂಘದ ವತಿಯಿಂದ ಕೊತ್ತನೂರು ಗ್ರಾಮದ ಸರ್ವೆ ನಂ 87/5 ರ ಪರವಾಗಿ 1989 ನೇ ಇಸವಿಯಲ್ಲಿ ನೀಡಿದ ಆಕ್ಷೇಪಣೆಗಳ ಪ್ರಕಾರ ಪ್ರಾಧಿಕಾರ ಯಾವ ಕ್ರಮಗಳನ್ನು ಕೈಗೊಂಡಿದೆ? (ಮಾಹಿತಿಯನ್ನು ಒದಗಿಸುವುದು) | ಶ್ರೀ ಪಿ.ಆರ್.ರಮೇಶ್ ರವರು ದಿನಾಂಕ:27.01.1988 ರಲ್ಲಿ ವಸತಿ & ನಗರಾಭಿವೃದ್ಧಿ ಇಲಾಖೆಗೆ ಪತ್ರ ನೀಡಿ ಕೊತ್ತನೂರು ಗ್ರಾಮದ ಸರ್ವೆ ನಂ 87/5 ರಲ್ಲಿ ಸುಮಾರು 05 ಎಕರೆ ಜಮೀನು ಇದ್ದು ಅದರಲ್ಲಿ ಸುಮಾರು 200 ಜನ ಹಿಂದುಳಿದ ಜಾತಿ, ಪಂಗಡದವರು ವಾಸವಿದ್ದು ಸದರಿ ರೆವಿನ್ಯು ನಿವೇಶನದಾರರಿಗೆ ಸಕ್ರಮಗೊಳಿಸಬೇಕೆಂದು ಕೋರಿರುತ್ತಾರೆ.<br><br>ಸದರಿ ಪತ್ರದನ್ವಯ ಪ್ರಾಧಿಕಾರದಿಂದ ವರದಿ ಕೋರಲಾಗಿದ್ದು, ಪ್ರಾಧಿಕಾರದ ಪತ್ರ: ದಿನಾಂಕ: 07.07.1988 ರಲ್ಲಿ ಈ ಕೆಳಕಂಡಂತೆ ಪ್ರಾಧಿಕಾರವು ಸರ್ಕಾರಕ್ಕೆ ವರದಿ ನೀಡಿರುತ್ತದೆ.<br><br>"ಕೊತ್ತನೂರು ಗ್ರಾಮದ ಸರ್ವೆ ನಂ 87/5 ರಲ್ಲಿ ಭೂಸ್ವಾಧೀನ ಪ್ರಕ್ರಿಯೆ ಚಾಲ್ತಿಯಲ್ಲಿದ್ದು ಬಿ.ಡಿ.ಎ. ಕಾಯ್ದೆ 17(5) ರನ್ವಯ ಆಸಕ್ತಿಯುಳ್ಳ ಹಕ್ಕುದಾರರ ಲಿಖಿತ ಆಕ್ಷೇಪಣೆ /ಹೇಳಿಕೆ ಪಡೆದು ಸಕ್ಷಮ ಪ್ರಾಧಿಕಾರದ ಮುಂದೆ ಮಂಡಿಸಿ ಸೂಕ್ತ ಆದೇಶ ಪಡೆದು ನಂತರ ಕ್ರಮ ವಹಿಸಲಾಗುವುದು"<br><br>ತದನಂತರ ದಿನಾಂಕ: 04.10.2010 ರಂದು ಮೇಲ್ಕಂಡ ಸರ್ವೆ ನಂ.87/5 ರಲ್ಲಿನ 3 ಎಕರೆ ಜಮೀನನ್ನು ಭೂಸ್ವಾಧೀನ ಕಾಯ್ದೆ ಕಲಂ 48(1)ರನ್ವಯ ಭೂಸ್ವಾಧೀನದಿಂದ ಕೈಬಿಟ್ಟು ಅಧಿಸೂಚನೆಯನ್ನು ಹೊರಡಿಸಲಾಗಿರುತ್ತದೆ. |

ಸಂಖ್ಯೆ: ನಅಇ 63 ಬೆಂಭೂಸ್ವಾ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ